# ಉಪವಾಸದ ರಹಸ್ಯಗಳು

ಇಬ್ನ್ ಕುದಾಮ ಅಲ್‌ಮಕ್ದಿಸೀ




مدرسة الصفة الإسلامية

**MADRASATU SUFFAH AL ISLAMIYYA**

SKYWAY COMPLEX, 6TH BLOCK, KRISHNAPURA,
SURATKAL, MANGALORE - 575 014
PH: 0824-2271449 MOB: 8722695551

ತಿಳಿಯಿರಿ! ಉಪವಾಸಕ್ಕೆ ಕೆಲವು ವಿಶೇಷತೆಗಳಿವೆ. ಇದು ಬೇರೆ ಯಾವುದರಲ್ಲೂ ಇಲ್ಲ. ಕಾರಣ, ಅಲ್ಲಾಹು ಉಪವಾಸವನ್ನು ಅವನಿಗೆ ಸೇರಿಸಿ ಹೇಳಿದ್ದಾನೆ. ಅಲ್ಲಾಹು ಹೇಳುವುದು ನೋಡಿ:

«الصَّوْمُ لِي وَأَنَا أَجْزِي بِهِ».

"ಉಪವಾಸ ನನಗಿರುವಂಥದ್ದು. ನಾನೇ ಅದಕ್ಕೆ ಪ್ರತಿಫಲ ನೀಡುತ್ತೇನೆ." (ಅಲ್‍ಬುಖಾರಿ 1904 ಮತ್ತು ಮುಸ್ಲಿಂ 1151)

ಅಲ್ಲಾಹು ಈ ರೀತಿ ಉಪವಾಸವನ್ನು ಅವನಿಗೆ ಸೇರಿಸಿ ಹೇಳಿದ್ದು ಉಪವಾಸಕ್ಕೆ ಬಹಳ ಶ್ರೇಷ್ಠತೆಯಿದೆ ಎನ್ನುವುದಕ್ಕೆ ಧಾರಾಳ ಪುರಾವೆಯಾಗಿದೆ. ಅಲ್ಲಾಹು ಕಅ್‍ಬಾಲಯವನ್ನು ಕೂಡ ಅವನಿಗೆ ಸೇರಿಸಿ ಹೇಳಿದ್ದಾನೆ. ಅವನು ಹೇಳುತ್ತಾನೆ:




“ನನ್ನ ಮನೆಯನ್ನು ಸ್ವಚ್ಛ ಮಾಡಿರಿ.” (ಅಲ್‌ಹಜ್ಜ್: 26)

## ಉಪವಾಸದ ಶ್ರೇಷ್ಠತೆಗಳು:

ಎರಡು ಅರ್ಥಗಳಿಂದ ನೋಡುವಾಗ ಉಪವಾಸಕ್ಕೆ ಶ್ರೇಷ್ಠತೆಯಿದೆ ಎನ್ನುವುದನ್ನು ಮನದಟ್ಟು ಮಾಡಿಕೊಳ್ಳಬಹುದು.

1. ಅದೊಂದು ರಹಸ್ಯ ಮತ್ತು ಗೋಪ್ಯ ಕರ್ಮ. ಅದು ಯಾರಿಗೂ ಕಾಣುವುದಿಲ್ಲ. ಅದರಲ್ಲಿ ಯಾವುದೇ ತೋರಿಕೆಯಿಲ್ಲ.

2. ಅದು ಅಲ್ಲಾಹನ ಶತ್ರುವನ್ನು ನಿಗ್ರಹಿಸುತ್ತದೆ. ಕಾರಣ ಶತ್ರುವಿನ ಮಾಧ್ಯಮ ಚಪಲಗಳಾಗಿವೆ. ತಿನ್ನಲು, ಕುಡಿಯಲು ಸಿಕ್ಕಿದರೆ ಚಪಲ ಹೆಚ್ಚಾಗುತ್ತದೆ. ಚಪಲದ ಭೂಮಿ ಹಸಿರಾಗುತ್ತದೆ. ಶೈತಾನನು

ಆ ಭೂಮಿಗೆ ಪದೇ ಪದೇ ಪ್ರವೇಶ ಮಾಡುತ್ತಾನೆ. ಆದರೆ ಚಪಲವನ್ನು ತ್ಯಜಿಸುವಾಗ ಶೈತಾನರು ಬರುವ ಮಾರ್ಗವು ಇಕ್ಕಟ್ಟಾಗುತ್ತದೆ.

ಇದಲ್ಲದೆ ಉಪವಾಸದ ಶ್ರೇಷ್ಠತೆಗಳನ್ನು ವಿವರಿಸುವ ಇನ್ನೂ ಅನೇಕ ಪ್ರಸಿದ್ಧ ಹದೀಸ್‌ಗಳು ವರದಿಯಾಗಿವೆ.

## ಉಪವಾಸದ ಸುನ್ನತ್‌ಗಳು:

ಸಹರಿ ಉಣ್ಣುವುದು ಮತ್ತು ಸಹರಿಯನ್ನು ತಡಮಾಡುವುದು ಸುನ್ನತ್ತಾಗಿದೆ. ಅದೇ ರೀತಿ ಉಪವಾಸ ತೊರೆಯಲು ಆತುರಪಡುವುದು ಮತ್ತು ಖರ್ಜೂರ ಸೇವಿಸಿ ಉಪವಾಸ ತೊರೆಯುವುದು ಸುನ್ನತ್ತಾಗಿದೆ.

ಪ್ರವಾದಿ(ಸ) ಯವರನ್ನು ಅನುಸರಿಸುತ್ತಾ ರಮದಾನ್ ತಿಂಗಳಲ್ಲಿ ಉದಾರತನ ತೋರುವುದು, ಸದಾಚಾರಗಳನ್ನು ನಿರ್ವಹಿಸುವುದು ಮತ್ತು ಅತಿಯಾಗಿ ದಾನಧರ್ಮ ಮಾಡುವುದು ಸುನ್ನತ್ತಾಗಿದೆ.

ರಮದಾನ್ ತಿಂಗಳಲ್ಲಿ ಕುರ್‌ಆನ್ ಕಲಿಯುವುದು, ಕೊನೆಯ ಹತ್ತು ದಿನಗಳಲ್ಲಿ ಇಅ್‌ತಿಕಾಫ್ ನಿರ್ವಹಿಸು-ವುದು ಮತ್ತು ಹೆಚ್ಚು ಹೆಚ್ಚು ಸತ್ಕರ್ಮಗಳನ್ನು ಮಾಡಲು ಪರಿಶ್ರಮಿಸುವುದು ಸುನ್ನತ್ತಾಗಿದೆ.

ಅಲ್‌ಬುಖಾರಿ ಮತ್ತು ಮುಸ್ಲಿಮ್‌ನಲ್ಲಿರುವ ಹದೀಸೊಂ-ದರಲ್ಲಿ ಆಯಿಶಾ(ರ) ಹೇಳುತ್ತಾರೆ:

كَانَ النَّبِيُّ صَلَّى اللَّهُ عَلَيْهِ وَسَلَّمَ إِذَا دَخَلَ الْعَشْرُ [يَعْنِي الْأَخِيرَ] شَدَّ مِئْزَرَهُ وَأَحْيَا اللَّيْلَ وَأَيْقَظَ أَهْلَهُ.

"ರಮದಾನ್ ತಿಂಗಳ ಕೊನೆಯ ಹತ್ತು ಬಂದರೆ ಪ್ರವಾದಿ ರವರು ಲುಂಗಿಯನ್ನು ಕಟ್ಟುತ್ತಿದ್ದರು, ರಾತ್ರಿಯನ್ನು ಜೀ-ವಂತಗೊಳಿಸುತ್ತಿದ್ದರು ಮತ್ತು ತಮ್ಮ ಮಡದಿಯರನ್ನು ಎಬ್ಬಿಸುತ್ತಿದ್ದರು." (ಅಲ್‌ಬುಖಾರಿ 2024; ಮುಸ್ಲಿಂ 1174)

ಲುಂಗಿಯನ್ನು ಕಟ್ಟುವುದಕ್ಕೆ ವಿದ್ವಾಂಸರು ಎರಡು ಅರ್ಥ-ಗಳನ್ನು ನೀಡಿದ್ದಾರೆ.

1. ಮಡದಿಯರಿಂದ ದೂರವಾಗುವುದು.
2. ಪರಿಶ್ರಮಿಸಲು ಮತ್ತು ಸತ್ಕರ್ಮವೆಸಗಲು ಸಿದ್ಧತೆ ಮಾಡಿಕೊಳ್ಳುವುದು.

ವಿದ್ವಾಂಸರು ಹೇಳುತ್ತಾರೆ: ಕೊನೆಯ ಹತ್ತರಲ್ಲಿ ಪರಿಶ್ರ-ಮಪಡಲು ಕಾರಣ ಆ ಹತ್ತು ರಾತ್ರಿಗಳಲ್ಲಿ ಲೈಲತುಲ್ ಕದ್ರ್ ಬರುತ್ತದೆ.

## ಉಪವಾಸದ ರಹಸ್ಯಗಳು ಮತ್ತು ಶಿಷ್ಟಾಚಾ-ರಗಳು

ಉಪವಾಸ ಮೂರು ಹಂತಗಳಲ್ಲಿದೆ: ಸಾಮಾನ್ಯ ಉಪವಾಸ, ವಿಶೇಷ ಉಪವಾಸ ಮತ್ತು ವಿಶಿಷ್ಟ ಉಪವಾಸ.

ಸಾಮಾನ್ಯ ಉಪವಾಸ ಎಂದರೆ ಹೊಟ್ಟೆ ಮತ್ತು ಗುಪ್ತಾಂ-ಗವನ್ನು ಸ್ವೇಚ್ಛೆಯಿಂದ ರಕ್ಷಿಸುವುದು.

ವಿಶೇಷ ಉಪವಾಸ ಎಂದರೆ: ಕಣ್ಣು, ನಾಲಗೆ, ಕೈ, ಕಾಲು, ಶ್ರವಣ, ದೃಷ್ಟಿ ಮತ್ತು ಇತರೆಲ್ಲಾ ಅಂಗಗಳನ್ನು ಪಾಪಗ-ಳಿಂದ ರಕ್ಷಿಸುವುದು.

ವಿಶಿಷ್ಟ ಉಪವಾಸ ಎಂದರೆ: ಮನುಷ್ಯನನ್ನು ಅಲ್ಲಾಹ-ನಿಂದ ದೂರಗೊಳಿಸುವ ಕೆಟ್ಟ ಆಲೋಚನೆ ಮತ್ತು ಕೆಟ್ಟ ವಿಚಾರಗಳಿಂದ ದೂರವಾಗುವುದು ಮತ್ತು ಅಲ್ಲಾಹ-ನೊಂದಿಗೆ ಸಂಬಂಧವಿಲ್ಲದ ಯಾವುದೇ ವಿಚಾರ ಹೃದ-ಯದೊಳಗೆ ತೂರದಂತೆ ಎಚ್ಚರವಹಿಸುವುದು.

ಈ ರೀತಿಯ ಉಪವಾಸಕ್ಕೆ ಕೆಲವು ವ್ಯಾಖ್ಯಾನಗಳಿವೆ. ಅದನ್ನು ನಾನು ಬೇರೆ ಕೃತಿಗಳಲ್ಲಿ ವಿವರಿಸಿದ್ದೇನೆ.

## ವಿಶೇಷ ಉಪವಾಸದ ಶಿಷ್ಟಾಚಾರಗಳು:

ನಿಷಿದ್ಧವಾದ, ಕರಾಹತ್ ಆದ ಅಥವಾ ನಿಷ್ಪ್ರಯೋಜಕ-ವಾದ ಮಾತುಗಳು ಹೊರಹೊಮ್ಮದಂತೆ ದೃಷ್ಟಿ ಮತ್ತು ನಾಲಗೆಯನ್ನು ಹಾಗೂ ದೇಹದ ಇತರ ಅಂಗಗಳನ್ನು ನಿಯಂತ್ರಿಸುವುದು. ಅಲ್‌ಬುಖಾರಿ ವರದಿ ಮಾಡಿದ ಹದೀಸಿನಲ್ಲಿ ಹೀಗಿದೆ: ಪ್ರವಾದಿ(ಸ) ರವರು ಹೇಳಿದರು:

«مَنْ لَمْ يَدَعْ قَوْلَ الزُّورِ وَالْعَمَلَ بِهِ فَلَيْسَ لِلَّهِ حَاجَةٌ فِي أَنْ يَدَعَ طَعَامَهُ وَشَرَابَهُ».

“ಸುಳ್ಳು ಹೇಳುವುದನ್ನು ಮತ್ತು ಅದರ ಆಧಾರದಲ್ಲಿರುವ ಕರ್ಮಗಳನ್ನು ಯಾರು ತ್ಯಜಿಸುವುದಿಲ್ಲವೋ ಅವರು ಆಹಾರ–ಪಾನೀಯಗಳನ್ನು ತ್ಯಜಿಸಬೇಕೆಂಬ ಯಾವ ಬಯಕೆಯೂ ಅಲ್ಲಾಹನಿಗಿಲ್ಲ.” (ಅಲ್‌ಬುಖಾರಿ 1903)

ರಾತ್ರಿ ಹೊಟ್ಟೆ ತುಂಬಾ ತಿನ್ನಬಾರದು. ಅಗತ್ಯವಿರುವಷ್ಟು

ಮಾತ್ರ ತಿನ್ನಬೇಕು. ಕಾರಣ, ಮನುಷ್ಯನು ಹೊಟ್ಟೆಯನ್ನು ತುಂಬಿಸುವಂತೆ ಅತ್ಯಂತ ಕೆಟ್ಟ ರೀತಿಯಲ್ಲಿ ಇನ್ನಾವ ಚೀಲವನ್ನೂ ತುಂಬಿಸುವುದಿಲ್ಲ. ರಾತ್ರಿಯ ಮೊದಲ ಭಾಗದಲ್ಲಿ ಹೊಟ್ಟೆ ತುಂಬಿಸಿದವನಿಗೆ ರಾತ್ರಿಯ ಉಳಿದ ಭಾಗದಲ್ಲಿ ಆರಾಧನೆ ಮಾಡಿ ಅದರ ಪ್ರಯೋಜನ ಪಡೆಯಲು ಸಾಧ್ಯವಾಗುವುದಿಲ್ಲ. ಅದೇ ರೀತಿ ಸಹರಿಯ ಸಮಯದಲ್ಲಿ ಹೊಟ್ಟೆ ತುಂಬಾ ಉಂಡರೆ ಮಧ್ಯಾಹ್ನದ ತನಕ ಯಾವುದರಲ್ಲೂ ಆಸಕ್ತಿಯಿರುವುದಿಲ್ಲ. ಅತಿಯಾಗಿ ತಿನ್ನುವುದರಿಂದ ಆಲಸ್ಯ ಮತ್ತು ಮಂಪರು ಕಾಡುತ್ತದೆ.

ಅತಿಯಾಗಿ ತಿನ್ನುವುದರಿಂದ ಉಪವಾಸದ ಮುಖ್ಯ ಉದ್ದೇಶವು ನಷ್ಟವಾಗುತ್ತದೆ. ಉಪವಾಸದ ಮುಖ್ಯ ಉದ್ದೇಶವು ಹಸಿವು ಎಂದರೆ ಏನೆಂದು ತಿಳಿಯುವುದು ಮತ್ತು ಚಪಲವನ್ನು ನಿಯಂತ್ರಿಸುವುದಾಗಿದೆ.

## ಐಚ್ಛಿಕ ಉಪವಾಸ:

ತಿಳಿಯಿರಿ! ಶ್ರೇಷ್ಠ ದಿನಗಳಲ್ಲಿ ಉಪವಾಸ ಆಚರಿಸುವುದು ಪ್ರಬಲ ಸುನ್ನತ್ತಾಗಿದೆ. ಕೆಲವು ಶ್ರೇಷ್ಠ ದಿನಗಳು ವರ್ಷಂ-ಪ್ರತಿ ಮರುಕಳಿಸುತ್ತವೆ. ಉದಾಹರಣೆಗೆ: ರಮದಾನ್ ತಿಂಗಳ ಬಳಿಕ ಬರುವ ಶವ್ವಾಲ್ ತಿಂಗಳಲ್ಲಿ ಆರು ದಿನ ಉಪವಾಸ ಆಚರಿಸುವುದು, ಅರಫ ದಿನದ ಉಪವಾಸ, ಆಶೂರಾ ದಿನದ ಉಪವಾಸ, ದುಲ್ ಹಿಜ್ಜಃ ತಿಂಗಳ ಮೊದಲ ಹತ್ತು ದಿನಗಳ ಉಪವಾಸ, ಮುಹರ್ರಮ್ ಉಪವಾಸ ಇತ್ಯಾದಿ.

ಕೆಲವು ಉಪವಾಸಗಳು ಪ್ರತಿ ತಿಂಗಳು ಮರುಕಳಿಸುತ್ತವೆ: ಉದಾ: ಪ್ರತಿ ತಿಂಗಳು ಮೂರು ದಿನ (13, 14 ಮತ್ತು 15ನೇ ದಿನ) ಉಪವಾಸ ಆಚರಿಸುವುದು.

ಕೆಲವು ಉಪವಾಸಗಳು ಪ್ರತಿ ವಾರ ಮರುಕಳಿಸುತ್ತವೆ: ಉದಾ: ಸೋಮವಾರ ಮತ್ತು ಗುರುವಾರದ ಉಪವಾಸ.

## ದಿನ ಬಿಟ್ಟು ದಿನ ಉಪವಾಸ ಆಚರಿಸುವುದು:

ಶ್ರೇಷ್ಠವಾದ ಐಚ್ಛಿಕ ಉಪವಾಸ ದಾವೂದ್(ಅ) ರವರ ಉಪವಾಸವಾಗಿದೆ. ಅವರು ದಿನ ಬಿಟ್ಟು ದಿನ ಉಪವಾಸ ಆಚರಿಸುತ್ತಿದ್ದರು.

ಈ ರೀತಿ ಉಪವಾಸ ಆಚರಿಸುವುದಕ್ಕೆ ಮೂರು ಅರ್ಥಗಳಿವೆ:

1. ಉಪವಾಸವಿಲ್ಲದ ದಿನ ದೇಹದ ಹಕ್ಕನ್ನು ಪೂರೈಸುವುದು ಮತ್ತು ಉಪವಾಸವಿರುವ ದಿನ ದೇಹವನ್ನು ಪೂರ್ಣವಾಗಿ ಆರಾಧನೆಯಲ್ಲಿ ಮುಳುಗಿಸುವುದು. ಇದರಿಂದ ದೇಹಕ್ಕಿರುವ ಹಕ್ಕನ್ನು ಪೂರೈಸುವುದರೊಂದಿಗೆ ಅದರಿಂದ ಪಡೆಯಬೇಕಾದ ಹಕ್ಕನ್ನೂ ಪಡೆಯಲು ಸಾಧ್ಯವಾಗುತ್ತದೆ. ಇದು ನ್ಯಾಯೋಚಿತ ರೀತಿಯಾಗಿದೆ.

2. ಉಪವಾಸವಿಲ್ಲದ ದಿನ ಕೃತಜ್ಞತೆ ಸಲ್ಲಿಸುವ ದಿನ.

ಉಪವಾಸವಿರುವ ದಿನ ಸಹನೆ ವಹಿಸುವ ದಿನ. ಈಮಾನಿನಲ್ಲಿ ಎರಡು ಭಾಗವಿದೆ: ಕೃತಜ್ಞತೆ ಮತ್ತು ಸಹನೆ.

3. ದಿನ ಬಿಟ್ಟು ದಿನ ಉಪವಾಸ ಆಚರಿಸುವುದರಿಂದ ದೇಹದ ಮೇಲೆ ಸಂಪೂರ್ಣ ನಿಯಂತ್ರಣ ಸಾಧಿಸಲು ಸಾಧ್ಯವಾಗುತ್ತದೆ.

## ವರ್ಷಪೂರ್ತಿ ಉಪವಾಸ ಆಚರಿಸುವುದು:

ಮುಸ್ಲಿಮ್‌ನಲ್ಲಿರುವ ಅಬೂ ಕತಾದ(ರ) ರವರ ಹದೀಸಿ-ನಲ್ಲಿ ಹೀಗಿದೆ: ಒಮ್ಮೆ ಉಮರ್(ರ) ರವರು ಪ್ರವಾದಿ(ಸ) ರವರೊಂದಿಗೆ "ವರ್ಷಪೂರ್ತಿ ಉಪವಾಸ ಆಚರಿಸುವ-ವನ ವಿಧಿಯೇನು?" ಎಂದು ಕೇಳಿದಾಗ, ಪ್ರವಾದಿ(ಸ) ಯವರು ಹೇಳಿದರು:

«لَا صَامَ وَلَا أَفْطَرَ» أَوْ «لَمْ يَصُمْ وَلَمْ

يُفْطِرْ».

“ಅವನು ಉಪವಾಸ ಆಚರಿಸಲೂ ಇಲ್ಲ, ಉಪವಾಸ ತೊರೆಯಲೂ ಇಲ್ಲ.” (ಮುಸ್ಲಿಂ 1162)

ಪ್ರವಾದಿ(ಸ) ಯವರು ಹೀಗೆ ಹೇಳಿದ್ದು ಉಪವಾಸ ಆಚರಿಸುವುದು ವಿರೋಧಿಸಲಾಗಿರುವ ದಿನಗಳೂ ಸೇರಿದಂತೆ ವರ್ಷಪೂರ್ತಿ ಉಪವಾಸ ಆಚರಿಸುವವರ ಬಗ್ಗೆಯಾಗಿದೆ. ಆದರೆ ಎರಡು ಈದ್ ಹಬ್ಬಗಳು ಮತ್ತು ತಶ್ರೀಕ್‌ನ ದಿನಗಳನ್ನು (ದುಲ್ ಹಿಜ್ಜ ತಿಂಗಳ 11, 12 ಮತ್ತು 13) ಬಿಟ್ಟು ಇತರೆಲ್ಲ ದಿನಗಳಲ್ಲಿ ನಿರಂತರ ಉಪವಾಸ ಆಚರಿಸುವುದರಲ್ಲಿ ತೊಂದರೆಯಿಲ್ಲ.

ಹಿಶಾಂ ಇಬ್ನ್ ಉರ್ವ(ರ) ರಿಂದ ವರದಿ: ಅವರ ತಂದೆ ಪ್ರತಿದಿನ ಉಪವಾಸ ಆಚರಿಸುತ್ತಿದ್ದರು. ಆಯಿಶಾ(ರ) ನಿತ್ಯ ಉಪವಾಸ ಆಚರಿಸುತ್ತಿದ್ದರು.

ಅನಸ್ ಇಬ್ನ್ ಮಾಲಿಕ್(ರ) ಹೇಳುತ್ತಾರೆ: ಪ್ರವಾದಿ(ಸ)

ರವರ ಮರಣಾನಂತರ ಅಬೂ ತಲ್ಹಾ(ರ) ನಿರಂತರ ನಲ್ವ-ತ್ತು ವರ್ಷಗಳ ಕಾಲ ಪ್ರತಿದಿನ ಉಪವಾಸ ಆಚರಿಸಿದರು.

ತಿಳಿಯಿರಿ! ಬುದ್ಧಿವಂತನು ಉಪವಾಸದ ಉದ್ದೇಶವನ್ನು ತಿಳಿದು ತನ್ನ ಶಕ್ತಿ ಸಾಮರ್ಥ್ಯಕ್ಕೆ ಅನುಗುಣವಾಗಿರುವ ಶ್ರೇಷ್ಠ ಕರ್ಮವನ್ನೇ ಆರಿಸುತ್ತಾನೆ.

ಇಬ್ನ್ ಮಸ್‌ಊದ್(ರ) ಅತಿ ಕಡಿಮೆ ಉಪವಾಸ ಆಚರಿ-ಸುತ್ತಿದ್ದರು. ಅವರು ಹೇಳುತ್ತಿದ್ದರು: "ನಾನು ಉಪವಾಸ ಆಚರಿಸಿದರೆ ನಮಾಝ್ ಮಾಡಲು ನನಗೆ ಶಕ್ತಿಯಿರು-ವುದಿಲ್ಲ. ನಾನು ಉಪವಾಸಕ್ಕಿಂತಲೂ ನಮಾಝನ್ನು ಇಷ್ಟಪಡುತ್ತೇನೆ."

ಕೆಲವರಿಗೆ ಉಪವಾಸ ಆಚರಿಸಿದರೆ ಕುರ್‌ಆನ್ ಪಾರಾಯಣ ಮಾಡಲು ಶಕ್ತಿಯಿರುವುದಿಲ್ಲ. ಆದ್ದರಿಂದ ಸಾಕಷ್ಟು ಕುರ್‌ಆನ್ ಪಾರಾಯಣ ಮಾಡುವುದಕ್ಕಾಗಿ ಅವರು ಪ್ರತಿದಿನ ಉಪವಾಸ ಆಚರಿಸುವುದಿಲ್ಲ. ಪ್ರತಿ-

ಯೊಬ್ಬರಿಗೂ ಅವರ ಸ್ಥಿತಿಯ ಕುರಿತು ಮತ್ತು ಅವರಿಗೆ ಯಾವುದು ಹಿತವೆಂಬುದರ ಕುರಿತು ಚೆನ್ನಾಗಿ ಗೊತ್ತಿ-ರುತ್ತದೆ.

(ಮುಖ್ತಸರ್ ಮಿನ್‌ಹಾಜುಲ್ ಕಾಸಿದೀನ್ ಎಂಬ ಗ್ರಂಥದ 38 ನೇ ಪುಟದಿಂದ 40 ನೇ ಪುಟದ ತನಕ)


الحركة النصيحة الإسلامية

ANNASEEHA ISLAMIC MOVEMENT

SURATKAL, MANGALORE - 575 014

MOB: 9731593091 / 9945171612

Jamiyathe Ahle Hadees

Mangalore